# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 14(83)
ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 15-02-2022
ಉತ್ತರಿಸುವ ಸಚಿವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದ ಮಹಿಳಾ ವಿಶ್ವವಿದ್ಯಾಲಯ ಸ್ಥಾಪನೆ ಆದಾಗಿನಿಂದ ಇಲ್ಲಿಯವರೆಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಿಂದ ನೀಡುತ್ತಿರುವ ಯೋಜನೆಗಳು ಯಾವುವು; ಹಾಗೂ ಅವುಗಳಿಗೆ ಬಿಡುಗಡೆ ಮಾಡಲಾದ ಅನುದಾನ ಎಷ್ಟು; | ಇದುವರೆವಿಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ವತಿಯಿಂದ ಶ್ರೀಮತಿ ಯಶೋಧರಮ್ಮ ದಾಸಪ್ಪ ದತ್ತುಪೀಠ ಸ್ಥಾಪಿಸಲು ಕರ್ನಾಟಕ ರಾಜ್ಯ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಯ, ವಿಜಯಪುರಕ್ಕೆ ಮಾತ್ರ 2014ನೇ ಸಾಲಿನಲ್ಲಿ ರೂ.20.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ. ಸದರಿ ಅನುದಾನದಿಂದ ವಾರ್ಷಿಕ ಬಡ್ಡಿ ರೂ. 1,60,000/- ಬರುತ್ತಿತ್ತು, ಇದನ್ನು ಪ್ರತಿ ವರ್ಷ ಈ ಕೆಳಕಂಡ ಮಹಿಳಾ ಕೇಂದ್ರಿಕೃತ ಕಾರ್ಯ ಚಟುವಟಿಕೆಗಳಿಗೆ ಬಳಸಲಾಗುತ್ತಿದೆ.<br><br>1. ಸಂಶೋಧನಾ ವಿಷಯದಲ್ಲಿ ಅತೀ ಹೆಚ್ಚು ಅಂಕ ಪಡೆದ 2 ವಿದ್ಯಾರ್ಥಿಗಳಿಗೆ ಸ್ಕಾಲರ್ ಶಿಪ್ ರೂ.10,000/-<br>2. ಸಂಶೋಧನಾ ವಿಷಯದಲ್ಲಿ 1 ವರ್ಷದಲ್ಲಿ ರೂ. 4,000/- ದಂತೆ 5 ವಿದ್ಯಾರ್ಥಿಗಳಿಗೆ ರೂ.20,000/-<br>3. 5 ಪಿಜಿ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ರೂ.48,000/-<br>4. ಪ್ರತಿ ವರ್ಷ ಒಂದು ಪುಸ್ತಕ ಪ್ರಕಟಣೆ ಮಾಡಿ ವಿತರಣೆಗಾಗಿ ರೂ.30,000/-<br>5. ದತ್ತಿ ಉಪನ್ಯಾಸಕ್ಕಾಗಿ ರೂ.20,000/-<br>6. ಪುಸ್ತಕ ಬರೆದ ಲೇಖಕರ ಸಂಭಾವನೆ ರೂ.10,000/-<br>7. ಪ್ರತಿ ವರ್ಷ ಸಲಹಾ ಸಮಿತಿ ರಚನೆಗಾಗಿ ರೂ.10,000/-<br>8. ಲೇಖನ ಸಾಮಾಗ್ರಿಗಳಿಗಾಗಿ 12,000/- |
| ಆ) | ರಾಜ್ಯದಲ್ಲಿರುವ ಏಕೈಕ ಮಹಿಳಾ ವಿಶ್ವವಿದ್ಯಾಲಯದಲ್ಲಿ ಓದುತ್ತಿರುವ ಮಹಿಳೆಯರಿಗೆ ಸಶಕ್ತಗೊಳಿಸಲು ಸರ್ಕಾರದ ಚಿಂತನೆಗಳೇನು; | ಮಹಿಳಾ ವಿಶ್ವವಿದ್ಯಾಲಯದಲ್ಲಿ ಓದುತ್ತಿರುವ ಮಹಿಳೆಯರನ್ನು ಸಶಕ್ತಗೊಳಿಸಲು ಈ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.<br><br>1) ಮಹಿಳಾ ವಿಶ್ವವಿದ್ಯಾಲಯದ ಎಲ್ಲಾ ಹಂತದಲ್ಲಿಯ ಪಠ್ಯ ಕ್ರಮವು ಮಹಿಳಾ ಸಬಲೀಕರಣ ಕೇಂದ್ರಿತವಾಗಿದೆ (ಸ್ನಾತಕ, ಸ್ನಾತಕೋತ್ತರ, ಪಿ.ಜಿ. ಡಿಪ್ಲೋಮಾ ಮತ್ತು ಸಂಶೋಧನೆ).<br>2) ಮಹಿಳಾ ಸಬಲೀಕರಣದ ಹಿನ್ನೆಲೆಯಲ್ಲಿ ವಿಶೇಷವಾದ ನಿರಂತರ ಕಾರ್ಯಕ್ರಮಗಳಾದ ಅನನ್ಯ ಆಹಾರ ಸಂಸ್ಕರಣೆ, ಬಯೋಡೀಸೆಲ್ ತರಬೇತಿ, ಪೇಪರ್ ಪುನರ್ ಉತ್ಪಾದನೆ, ಮಹಿಳಾ ಕಾನೂನಿನ ಅರಿವು, ಘನತೆಯ ಬದುಕು ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.<br>3) ಮಹಿಳಾ ಸಬಲೀಕರಣ ಕೇಂದ್ರಿತವಾದ ಸಂಶೋಧನೆಗಳು ನಿರಂತರವಾಗಿ ಮಹಿಳಾ ವಿಶ್ವವಿದ್ಯಾಲಯ ಎಲ್ಲಾ ವಿಭಾಗಗಳಲ್ಲಿ ನಡೆಯುತ್ತಿವೆ. |

....2.

| | | |
|---|---|---|
| ಇ) | ಇಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರನ್ನು ಮಹಿಳಾ ಕೇಂದ್ರಿತ ವಿಷಯಗಳ ಅಧ್ಯಯನ ಹಾಗೂ ಸಂಶೋಧನೆಗೆ ಬಳಸಿಕೊಳ್ಳುವ ಬಗ್ಗೆ ಸರ್ಕಾರವು ಚಿಂತನೆ ಮಾಡಿದೆಯೇ: | ಮಹಿಳಾ ವಿಶ್ವವಿದ್ಯಾಲಯದಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರನ್ನು ಮಹಿಳಾ ಕೇಂದ್ರಿತ ವಿಷಯಗಳ ಅಧ್ಯಯನ ಹಾಗೂ ಸಂಶೋಧನೆಗೆ ತೊಡಗಿಸಿಕೊಳ್ಳಲಾಗಿದೆ. |
| ಈ) | ಇಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರಿಗೆ ಶುಲ್ಕ ವಿನಾಯಿತಿ/ ಸ್ಕಾಲರ್‌ಶಿಪ್ ಕೊಡುವ ಯೋಜನೆ ಇದೆಯೇ? | ಮಹಿಳಾ ವಿಶ್ವವಿದ್ಯಾಲಯದಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರಿಗೆ ಶುಲ್ಕ ವಿನಾಯಿತಿ/ ಸ್ಕಾಲರ್ ಶಿಫ್ ಕೊಡುವ ಯೋಜನೆಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

**ಸಂ:**ಮಮಇ 43 ಮಮಅ 2022

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 14(83)ಕ್ಕೆ ಅನುಬಂಧ

ಕರ್ನಾಟಕ ರಾಜ್ಯ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯದ ಓಬಿಸಿ ಸೆಲ್

- ವಿದ್ಯಾಶ್ರೀ ಶಿಷ್ಯವೇತನ
- ರಿಸರ್ಚ ಶಿಷ್ಯವೇತನ

ಎಸ್‌ಸಿ/ಎಸ್‌ಟಿ ಸೆಲ್

- ಎಸ್‌ಸಿ/ಎಸ್‌ಟಿ ಶಿಷ್ಯವೇತನ

ಮೈನಾರಿಟಿ ಸೆಲ್

- ರಾಷ್ಟ್ರೀಯ ಸ್ಕಾಲರ್‌ಶಿಫ್ ಪೋರ್ಟ್ರಲ್ (ಎನ್‌ಎಸ್‌ಪಿ)
- ರಾಜ್ಯ ಸ್ಕಾಲರ್‌ಶಿಫ್ ಪೋರ್ಟ್ರಲ್ (ಎನ್‌ಎಸ್‌ಪಿ)
- ವಿದ್ಯಾಶ್ರೀ ಶಿಷ್ಯವೇತನ
- ರಿಸರ್ಚ ಸ್ಕಾಲರ್‌ಶಿಫ್
- ದಿವಂಗತ ಸಾವಿತ್ರಿ ಪಂಚಗಟ್ಟಿ ಶಿಷ್ಯವೇತನ (ಪಿಜಿ ವಿದ್ಯಾರ್ಥಿನಿಯರಿಗೆ)
- ದಿವಂಗತ ಇಂದುಮತಿ ಪಾಟೀಲ ಶಿಷ್ಯವೇತನ,
- ಶ್ರೀಮತಿ ಸುನಂದ ಪೆರೂರ ಶಿಷ್ಯವೇತನ,
- ಶ್ರೀಮತಿ ಯಮುನಾಬಾಯಿ ಸಂಕದ ಶಿಷ್ಯವೇತನ,
- ದಿವಂಗತ ಶೋಭಾ ರಮೇಶ ಜಿಗಜಿಣಗಿ ಶಿಷ್ಯವೇತನ,
- ಪ್ರೊ. ಎ.ಕೆ. ಬರಡೋಲ ಶಿಷ್ಯವೇತನ,
- ಶ್ರೀಮತಿ ಯಶೋಧರಮ್ಮ ದಾಸಪ್ಪ ಶಿಷ್ಯವೇತನ,
- ಶ್ರೀಮತಿ ಯಶೋಧರಮ್ಮ ದಾಸಪ್ಪ ದತ್ತಿಪೀಠ ಸಂಶೋಧನಾ ಶಿಷ್ಯವೇತನ,
- ಅಮೃತಾ ಆರ್. ಚಂದಾವರಕರ ಸಂಶೋಧನಾ ಸಾದಿಲ್ವಾರು ಸಹಾಯಧನ, ಪೂರ್ಣಾವಧಿ ಪಿ.ಎಚ್.ಡಿ.
- ಶ್ರೀ ಎಂ.ಎಸ್.ರಾಮಯ್ಯ ಸ್ಮರಣಾರ್ಥ ಶಿಷ್ಯವೇತನ,
- ದಿವಂಗತ ಶ್ರೀಮತಿ ವಿಮಲಾಬಾಯಿ ವ್ಹಿ ದೇಶಪಾಂಡೆ ಶಿಷ್ಯವೇತನ
- ಶ್ರೀಮತಿ ಎಚ್. ವ್ಹಿ. ಲಕ್ಷ್ಮದೇವಮ್ಮ ಶಿಷ್ಯವೇತನ,
- ಶ್ರೀಮತಿ ವಿದ್ಯಾ ಆರ್ ಸೊಂಡೂರು ಶಿಷ್ಯವೇತನ,
- ದಿವಂಗತ ಶ್ರೀಮತಿ ಸಾವಿತ್ರು ಪಂಚಗಟ್ಟಿ ಶಿಷ್ಯವೇತನ (ಯು ಜಿ ವಿದ್ಯಾರ್ಥಿನಿಯರು)

ಸಿಂಧನೂರ ಪಿಜಿ ಸೆಂಟರ್

- ವಿದ್ಯಾಶ್ರೀ ಶಿಷ್ಯವೇತನ